ಹೆಸರಿದ್ದರೂ ಅಮಂಗಳಕರವಾದ ಗ್ರಹದ ಕೀರ್ತನೆಯನ್ನು ಮಂಗಳವೂ, ಅಮಂಗಳವೂ ಆದ ರಾಗದಲ್ಲಿ ರಚಿಸಿರುವುದು ಗಮನಾರ್ಹ. ತಾಳವೂ ಸಹ ವಿಲಕ್ಷಣವಾದ ಸೂಳಾದಿ ತಾಳಗಳಲ್ಲಿ ಮೂರನೆಯದಾದ ರೂಪಕ ತಾಳವನ್ನು ಬಳಸಲಾಗಿದೆ.

ನಾಲ್ಕನೆಯ ಗ್ರಹವು ಬುಧ. ಈ ಕೃತಿಯು 'ಬುಧಮಾಶ್ರಯಾಮಿ ಸತತಂ । ಸುರಾದಿನುತಂ ಚಂದ್ರತಾರಾಸುತಂ॥' ಎಂದು ಆರಂಭವಾಗುತ್ತದೆ. ಕನ್ಯಾಧಿಪ, ಮಧುರ ಕವಿತಾಪ್ರದ, ಸದಾನಂದ ಸಹಿತನಾದ ಬುಧಗ್ರಹವನ್ನು ಸ್ತುತಿಸಲು ರಕ್ತಿರಾಗವಾದ ನಾಟಕುರಂಜಿಯನ್ನು ನಾಲ್ಕನೆಯ ತಾಳವಾದ ಝಂಪತಾಳವನ್ನು ಬಳಸಿರುವುದು ಗಮನಾರ್ಹ.

ಐದನೆಯ ಗ್ರಹವು ಗುರು ಅಥವಾ ಬೃಹಸ್ಪತಿ. ಕೀರ್ತನೆಯು 'ಬೃಹಸ್ಪತೇ ತಾರಾಪತೇ । ಬ್ರಹ್ಮಾಜಾತೇ ನಮೋಸ್ತುತೇ ॥ ಎಂದು ಆರಂಭವಾಗುತ್ತದೆ. 'ನಿರಾಮಯಾಯ' ಎಂದು ಹೇಳಿರುವುದು ತಂಬಿಯಪ್ಪನಿಗೆ ರೋಗವು ವಾಸಿಯಾಗಿರುವುದನ್ನು ಸೂಚಿಸಬಹುದು. ಮಹಾಬಲ ಮತ್ತು ಜಗತ್ರಯ ಗುರುವಾದ ಬೃಹಸ್ಪತಿಯನ್ನು ಸ್ತುತಿಸಲು ದೀಕ್ಷಿತರು ಅಠಾಣರಾಗವನ್ನೂ ತ್ರಿಪುಟ ತಾಳವನ್ನೂ ಬಳಸಿದ್ದಾರೆ. ಚತುಶ್ರುತಿ ಧೈವತವು ಅಂಶ ಮತ್ತು ನ್ಯಾಸಸ್ವರ ವಾಗಿರುವುದು, ಮತ್ತು ಒಂದೇ ಸ್ಥಾಯಿಯಲ್ಲಿ ದಾಟುಸ್ವರ ಪ್ರಯೋಗಗಳು ಈ ಗ್ರಹದ ಮಹತ್ವವನ್ನು ಸೂಚಿಸುತ್ತವೆ. ಇದರ ರಸವು ಅದ್ಭುತ. ಆದ್ದರಿಂದ ಅಠಾಣ ರಾಗವನ್ನು ಐದನೆಯ ಗ್ರಹದ ಸ್ತುತಿಯಲ್ಲಿ ಬಳಸಲಾಗಿದೆ.

ಆರನೆಯ ಗ್ರಹವು ಶುಕ್ರ. ಈ ಕೀರ್ತನೆಯ ಪಲ್ಲವಿಯು ಹೀಗಿದೆ. "ಶ್ರೀ ಶುಕ್ರ ಭಗವಂತಂ । ಚಿಂತಯಾಮಿ ಸತತಂ । ಸಕಲ ತತ್ವಜ್ಞಂ ॥ ಈ ಕೀರ್ತನೆಯಲ್ಲಿ ಹೋರಾ, ದ್ರೇಕ್ಕಾಣ ಇತ್ಯಾದಿ ಜ್ಯೋತಿಷ್ಯಶಾಸ್ತ್ರದ ಹಲವು ಪದಗಳನ್ನು ಬಳಸಲಾಗಿದೆ. ಶುಕ್ರನು ದೈತ್ಯಗುರು. ಆದ್ದರಿಂದ ದೀಕ್ಷಿತರು ದೇಶಿಯರಾಗದ ಫರಜ್‌ರಾಗವನ್ನು ಬಳಸಿದ್ದಾರೆ. ಕವಿ, ಕಳತ್ರ ಕಾರಕ ಮತ್ತು ಸಂಗೀತಕಾರಕನಾದ ಶುಕ್ರನ ಸ್ವಭಾವಕ್ಕೆ ತಕ್ಕ ರಕ್ತಿರಾಗವನ್ನು ಬಳಸಿದ್ದಾರೆ. ಆರನೆಯ ಗ್ರಹಕೀರ್ತನೆಗೆ ಆರನೆಯ ತಾಳವಾದ ಅಟತಾಳವನ್ನು ಬಳಸಿದ್ದಾರೆ.

ಏಳನೆಯ ಗ್ರಹವು ಶನಿ. 'ದಿವಾಕರ ತನುಜಂ—ಶನೈಶ್ಚರಂ । ಧೀರತರಂ ಸಂತತಂ ಚಿಂತಯೇ'॥ ಎಂದು ಶನಿ ಕೀರ್ತನೆಯು ಆರಂಭವಾಗುತ್ತದೆ. ಇದು ಅನೇಕ ದೇಶಗಳ ಸಂಗೀತದಲ್ಲಿ ಕಂಡು ಬರುವ ಯದುಕುಲ ಕಾಂಭೋಜಿರಾಗದಲ್ಲಿದೆ. ಇದರ ಧಾತು ಮಾತಿನ ರಸ ಮತ್ತು ಭಾವವನ್ನು ಸೂಚಿಸುತ್ತದೆ. ಇದರ ವಿಳಂಬ ಕಾಲವು, 'ಶನಿಃ ಮಂದಃ' ಎಂಬುದಕ್ಕೆ ಸರಿಯಾಗಿದೆ. ಇದರ ತಾಳವೂ ಸಹ ಏಳನೆಯ ಏಕತಾಳವಾಗಿದೆ

ಏಳು ಮುಖ್ಯ ಗ್ರಹಗಳ ಕೀರ್ತನೆಗಳ ನಂತರ ಛಾಯಾಗ್ರಹಗಳಾದ ರಾಹು ಮತ್ತು ಕೇತುವಿನ ಕೀರ್ತನೆಗಳಿವೆ. ಈ ಗ್ರಹಗಳ ಹೆಸರಿನಲ್ಲಿ ವಾರದ ದಿನಗಳಿಲ್ಲ.

ಈ ಕೀರ್ತನೆಗಳು ಪ್ರತಿಮಧ್ಯಮ ರಾಗಗಳಾದ ಮನೋಹರಿ ಮತ್ತು ಚಾಮರ ರಾಗಗಳಲ್ಲಿವೆ. ಪ್ರತಿ ಮಧ್ಯಮ ಸ್ವರವು ಕ್ಷುದ್ರಗ್ರಹಗಳ ಸ್ವಭಾವಕ್ಕೆ ಸೂಕ್ತವಾದ ವಕ್ರತ್ವವನ್ನು ಸೂಚಿಸುತ್ತದೆ. ಇವೆರಡಕ್ಕೂ ವಿಲಕ್ಷಣ ತಾಳವಾದ ರೂಪಕವನ್ನು ಬಳಸಲಾಗಿದೆ ಎಂಬುದು ಗಮನಾರ್ಹ

**ನವಪಲ್ಲವಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ದ ಪ ಸ̇

ಅ: ಸ̇ ನಿ ದ ಪ ದ ಮ ಗ ಸ

**ನವಭಾಸುರ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ̇

ಅ: ಸ̇ ನಿ̣ ದ ಮ ಗ ರಿ ಮ ಸ

**ನವಮಾಲಿ**--ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ನವನೀತ ಪಂಚಮ**—ಈ ರಾಗವು ೨೪ನೆ ಮೇಳಕರ್ತ ವರುಣ ಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ವ ಪ ದ ನಿ ಸ̇

ಅ: ಸ̇ ನಿ ಪ ಮ ರಿ ಸ

**ನವರಸ ಅಂಧಾಳಿ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ

ಆ: ಸ ಗ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಗ ಸ

**ನವರತ್ನ ಭೂಷಿಣಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ನವರತ್ನ ವಿಲಾಸ**—ಈ ರಾಗವು ೭೦ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ̇

ಅ: ಸ ದ ಪ ಮ ಗ ಮ ರಿ ಸ

**ನವರಸ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ನಿ ಸ

ಅ: ಸ ನಿ ಪ ಮ ರಿ ಸ

**ನವರಸ ಕನ್ನಡ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ಮ ಪ ಸ

ಅ: ಸ ನಿ ದ ಮ ಗ ರಿ ಸ

ಉಪಾಂಗರಾಗ. ಸ್ವರಾಂತರ ಷಾಡವ ರಾಗಕ್ಕೆ ಒಂದು ಅಪರೂಪವಾದ ನಿದರ್ಶನ. ಗ, ಮ, ರಿ ಗಳು ರಾಗ ಛಾಯಾಸ್ವರಗಳು. ಭಕ್ತಿರಸ ಪ್ರಧಾನವಾದ ರಮಣೀಯವಾದ ರಾಗ. ತ್ಯಾಗರಾಜರು 'ನಿನ್ನು ವಿನಾನಾಮದೇಂದು' ಮತ್ತು 'ಪಲುಕ ಕಂಡ ಚಕ್ಕೆರನು' ಎಂಬ ಎರಡು ಕೃತಿಗಳನ್ನು ರಚಿಸಿ ಈ ರಾಗವನ್ನು ಅಮರಗೊಳಿಸಿದ್ದಾರೆ. ಈ ರಾಗವು ತ್ಯಾಗರಾಜರ ಕೊಡುಗೆ. ಸಾರ್ವಕಾಲಿಕರಾಗ. ನೀಸಾದ ಮುಲೇಗ ಕಿಯುನಿ ಎಂಬ ಕೃತಿಯನ್ನು ರಾಮನಾಡ್ ಶ್ರೀನಿವಾಸಯ್ಯಂಗಾರ್ಯರು ಈ ರಾಗದಲ್ಲಿ ರಚಿಸಿದಾರೆ.

**ನವರಸ ಕುಂತಳಿ**—ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ದ ಮ ಗ ರಿ ಸ

**ನವರಸ ಕಲಾನಿಧಿ**—ಈ ರಾಗವು ೨೮ನೆ ಹರಿಕಾಂಭೋಜಿ ಮೇಳದ ಒಂದು ಜನ್ಯರಾಗ.

ಆ: ಸ ರಿ ಮ ಪ ಸ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ನವರಸ ಗಾಂಧಾರಿ**—ಈ ರಾಗವು ೫೦ನೆ ನಾಮನಾರಾಯಣಿ ಮೇಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ನವರಸ ಚಂದ್ರಿಕೆ**—(೧) ಈ ರಾಗವು ೧೩ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ಮ ಪ ಸ

ಅ: ಸ ದ ಪ ಮ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಜನ್ಯವಾಗಿದೆ.

ಆ: ಸ ರಿ ಗ ಮ ದ ನಿ ಸ

ಅ: ಸ ದ ಪ ಗ ರಿ ಸ

**ನವರಸ ಬಂಗಾಳ**—ಈ ರಾಗವು ೪೭ನೆ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ದ ನಿ ಸ

ಅ: ಸ ನಿ ದ ಮ ಗ ಸ

**ನವರಸಗಳು**—ಸಾಹಿತ್ಯ, ನಾಟಕ, ನಾಟ್ಯ ಮತ್ತು ಸಂಗೀತದಲ್ಲಿ ಒಂಬತ್ತು ಬಗೆಯ ರಸಗಳನ್ನು ಶಾಸ್ತ್ರಜ್ಞರು ಹೇಳಿದ್ದಾರೆ. ಅವು: ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ, ಶಾಂತ ಭಕ್ತಿಯನ್ನು ಹತ್ತನೆಯದೆಂದೂ, ಹನ್ನೊಂದನೆಯದೆಂದೂ, ದೇಶಪ್ರೇಮವನ್ನು ವಾತ್ಸಲ್ಯವನ್ನು ಹನ್ನೆರಡನೆಯದೆಂದೂ, ಕೆಲವರು ಪರಿಗಣಿಸುತ್ತಾರೆ ಶೃಂಗಾರ ರಸಕ್ಕೆ ರಸರಾಜವೆಂದು ಹೆಸರು.

**ನವರಸಂ**— ಕೇರಳದ ಕಥಕಳಿ ಸಂಗೀತದಲ್ಲಿ ಬರುವ ಒಂದು ರಾಗ.

**ನವರೋಜ್**—ಈ ರಾಗ ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಪ ಧ ನಿ ಸ ರಿ ಗ ಮ ಪ

ಅ: ಮ ಗ ರಿ ಸ ನಿ ಧ ಪ

ಮಧ್ಯಸ್ಥಾಯಿರಾಗ. ಪ್ರಸಿದ್ಧವಾದ ಪಂಚಮಾಂತ್ಯರಾಗ. ಗಮಕ ವರಿಕ ರಕ್ತಿರಾಗ. ಧೈವತ ಗಾಂಧಾರಗಳು ವಾದಿಸಂವಾದಿಗಳು. ರಿಷಭ, ಗಾಂಧಾರ, ಧೈವತಗಳು ನ್ಯಾಸ ಮತ್ತು ಜೀವಸ್ವರಗಳು. ದೀನರಸ ಪ್ರಧಾನವಾದರಾಗ. ಇದು ಅರೇಬಿಯಾ ಮತ್ತು ಪರ್ಷಿಯಾ ದೇಶಗಳಲ್ಲಿ ಪ್ರಾಚೀನರಾಗವಾಗಿದ್ದು ಭಾರತಕ್ಕೆ ೧೬ನೆ ಶತಮಾನದಲ್ಲಿ ಬಂದಿತು. ಕರ್ಣಾಟಕ ಸಂಗೀತದಲ್ಲಿ ಸುಮಾರು ೧೫೦ ವರ್ಷಗಳಿಂದ ಇದೆ. ಇದು ಜನಪದ ಸಂಗೀತದಲ್ಲೂ ವಿವಾಹದ ಹಾಡುಗಳಲ್ಲೂ ಕಂಡು ಬರುತ್ತದೆ. ವೆಂಕಟಮಖಿಯ ಕಲುವುಣ ರಕ್ಷಣ ಎಂಬ ಧ್ರುವತಾಳದ ಗೀತೆ, ಮುತ್ತುಸ್ವಾಮಿ ದೀಕ್ಷಿತರ ಹಸ್ತಿವದನಾಯ ನಮಸ್ತುಭ್ಯಂ (ಮಿಶ್ರ ಏಕ) ಎಂಬ ಕೃತಿ, ಸುಬ್ಬರಾಮ ದೀಕ್ಷಿತರ ಸಂಚಾರಿಗಳು, ಸ್ವಾತಿತಿರುನಾಳ್ ಮಹಾರಾಜರ ಸೇವೇನನು (ಛಾಪು) ಎಂಬ ಕೃತಿ, ಕ್ಷೇತ್ರಜ್ಞನ ಏಲವಚ್ಚಿತಿವೇ ಎಂಬ ಪದ ಈ ರಾಗದಲ್ಲಿವೆ.

**ನವರತ್ನಗಳು**—ಅಕ್ಬರ್ ಚಕ್ರವರ್ತಿಯ ಆಸ್ಥಾನದಲ್ಲಿ ಒಂಬತ್ತು ಶ್ರೇಷ್ಠ ವಿದ್ವಾಂಸರಿದ್ದರು. ತಾನ್‌ಸೇನನು ಅವರಲ್ಲಿ ಅತ್ಯಂತ ಶ್ರೇಷ್ಠನಾಗಿದ್ದನು. ಅಬುಲ್ ಫಜಲ್ ಮತ್ತು ರಾಜಾ ಬೀರಬಲ್ಲನು ನವಮಣಿಗಳೆಂಬ ವಿದ್ವಾಂಸರ ಕೂಟಕ್ಕೆ ಸೇರಿದವರಾಗಿದ್ದರು.

**ನವರತ್ನಮಾಲಾ**—ತಿರುವಾಂಕೂರಿನ ಸ್ವಾತಿತಿರುನಾಳ್ ಮಹಾರಾಜರು ರಚಿಸಿರುವ ಒಂಬತ್ತು ಕೃತಿಗಳ ಮಾಲಿಕೆ. ಶ್ರವಣ, ಕೀರ್ತನ, ಸ್ಮರಣೆ, ಪಾದಸೇವನ, ಅರ್ಚನ, ವಂದನೆ, ದಾಸ್ಯ, ಸಖ್ಯ, ಆತ್ಮನಿವೇದನೆ ಎಂಬ ನವವಿಧ ಭಕ್ತಿಯನ್ನು ಕುರಿತು ಈ ಕೃತಿಗಳನ್ನು ರಚಿಸಲಾಗಿದೆ.

**ನವರತ್ನ ಮಾಲಿಕಾ**—ಶ್ಯಾಮಾಶಾಸ್ತ್ರಿಗಳು ಮಧುರೈಮೀನಾಕ್ಷಿ ಅಮ್ಮನನ್ನು ಕುರಿತು, ಒಂಬತ್ತು ಕೃತಿಗಳನ್ನು ರಚಿಸಿ ಅಮ್ಮನವರ ಸನ್ನಿಧಿಯಲ್ಲಿ ಹಾಡಿದರು. ಅವರ ಶಿಷ್ಯ ಅಲಸೂರು ಕೃಷ್ಣಯ್ಯರ್ ಇವುಗಳನ್ನು ಸ್ವರ ಲಿಪಿತ ಸಹಿತ ಬರೆದು ಕೊಂಡರು. ಇವುಗಳಲ್ಲಿ ಏಳು ಕೃತಿಗಳು ಬಹುಪ್ರಸಿದ್ಧವಾಗಿವೆ –

| | | | | | |
|---|---|---|---|---|---|
| ೧. ಸರೋಜದಳ ನೇತ್ರಿ | — | ಶಂಕರಾಭರಣ | — | ಆದಿ |
| ೨. ಮಂದೇರೆಗತಿ | — | ಆನಂದ ಭೈರವಿ | — | ಛಾಪು |
| ೩. ನನ್ನು ಬ್ರೋವುಲಲಿತ | — | ಲಲಿತ | — | ಛಾಪು |
| ೪. ದೇವಿ ಮೀನನೇತ್ರಿ | — | ಶಂಕರಾಭರಣ | — | ಆದಿ |
| ೫. ಮೀನಲೋಚನಬ್ರೋವ | — | ಧನ್ಯಾಸಿ | — | ಛಾಪು |
| ೬. ದೇವೀ ನೀ ಪಾದ ಸಾರಸ | — | ಕಾಂಭೋಜಿ | — | ಆದಿ |
| ೭. ಮಾಯಮ್ಮಯನಿ | — | ಆಹಿರಿ | — | ಆದಿ |

**ನವರಾತ್ರಿ ಕೀರ್ತನೆಗಳು**—ತಿರುವನಂತಪುರದಲ್ಲಿ ನವರಾತ್ರಿ ಉತ್ಸವದ ಒಂಬತ್ತು ದಿನಗಳಲ್ಲಿ ಹಾಡಲು ಸ್ವಾತಿ ತಿರುನಾಳ್ ಮಹಾರಾಜರು ಒಂಬತ್ತು ಕೃತಿಗಳನ್ನು ರಚಿಸಿದರು. ಇವುಗಳನ್ನು ಪ್ರತಿವರ್ಷವೂ ನಡೆಯುವ ನವರಾತ್ರಿ ಉತ್ಸವ ಸಂದರ್ಭದಲ್ಲಿ ಹಾಡುತ್ತಾರೆ. ಇವು ಯಾವುವೆಂದರೆ—

| | | | | |
|---|---|---|---|---|
| ದೇವಿ ಜಗಜ್ಜನನಿ | — | ಶಂಕರಾಭರಣ | — | ಮೊದಲ ದಿನ |
| ಪಾಹಿಜನನಿ | — | ಕಲ್ಯಾಣಿ | — | ಎರಡನೆ ದಿನ |
| ದೇವೀ ಪಾವನೆ | — | ಸಾವೇರಿ | — | ಮೂರನೆ ದಿನ |
| ಭಾರತಿ ಮಾಮವ | — | ತೋಡಿ | — | ನಾಲ್ಕನೆ ದಿನ |
| ಜನನಿ ಮಾಮವ | — | ಭೈರವಿ | — | ಐದನೆ ದಿನ |
| ಸರೋರುಹಾಸನ ಜಾಯೇ | — | ಪಂತುವರಾಳಿ | — | ಆರನೆ ದಿನ |
| ಜನನಿ ಪಾಹಿಸದಾ | — | ಶುದ್ಧ ಸಾವೇರಿ | — | ಏಳನೆ ದಿನ |
| ಪಾಹಿಜನನಿ ಸತತಂ | — | ನಾಟಕುರಂಜಿ | — | ಎಂಟನೆ ದಿನ |
| ಪಾಹಿ ಪರ್ವತ ನಂದಿನಿ | — | ಆರಭಿ | — | ಒಂಬತ್ತನೇ ದಿನ |

**ನವವಿಧ ಭಕ್ತಿ**—ಭಾಗವತದಲ್ಲಿ ಹೇಳಿರುವ ಒಂಬತ್ತು ಬಗೆಯ ಭಕ್ತಿ ಯಾವುವೆಂದರೆ—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯ ಮಾತ್ಮನಿವೇದನಂ ॥

೧. ಶ್ರವಣ ೨. ಕೀರ್ತನೆ ೩. ಸ್ಮರಣ ೪. ಪಾದಸೇವನ ೫. ಅರ್ಚನ ೬ ವಂದನ ೭. ದಾಸ್ಯ ೮. ಸಖ್ಯ ೯. ಆತ್ಮನಿವೇದನ.

**ನವಿರ್**—ಕರುಣಾಮೃತಸಾಗರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಮರುದಯಾಳ್ ಎಂಬ ಪುರಾತನ ಮೇಳದ ಒಂದು ಜನ್ಯರಾಗ.

**ನವಸಂಧಿನೃತ್ಯ**—ದೇವಾಲಯಗಳ ಬ್ರಹ್ಮೋತ್ಸವದ ಮೊದಲನೆಯ ದಿನ ಅಂದರೆ ಧ್ವಜಾರೋಹಣದಂದು ಈ ಒಂಬತ್ತು ನೃತ್ಯಗಳನ್ನು ನಿರ್ದಿಷ್ಟವಾದ ದೇವತೆಗಳ ಪ್ರೀತ್ಯರ್ಥವಾಗಿ ಆಡುವ ಸಂಪ್ರದಾಯವಿತ್ತು. ಅವುಯಾವುವೆಂದರೆ—

| | | | |
|---|---|---|---|
| ೧. ಬ್ರಹ್ಮ | — ಮಧ್ಯ | — | ಸಮಪಾದ (ಕಮಲ ನೃತ್ಯ) |
| ೨. ಇಂದ್ರ | — ಪೂರ್ವ | — | ಭುಜಂಗ (ಭುಜಂಗ ಚಿತ್ರ) |
| ೩. ಅಗ್ನಿ | — ಆಗ್ನೇಯ | — | ಮೌವಲ ನೃತ್ತ |
| ೪. ಯಮ | — ದಕ್ಷಿಣ | — | ದಂಡಪಾದನೃತ್ತ |
| ೫. ನೈಋತಿ | — ನೈಋತ್ಯ | — | ಭುಜಂಗತ್ರಾಸ |
| ೬. ವರುಣ | — ಪಶ್ಚಿಮ | — | ಕುಂಚಿತ |
| ೭. ವಾಯು | — ವಾಯುವ್ಯ | — | ಭುಜಂಗಲಲಿತ |
| ೮. ಕುಬೇರ | — ಉತ್ತರ | — | ಸಂಧ್ಯ ನೃತ್ತ (ಅಂಕುಚಿತ ಪಾದ) |
| ೯. ಈಶಾನ | — ಈಶಾನ್ಯ | — | ಊರ್ಧ್ವಪಾದ (ಬ್ರಹ್ಮರಿಕ ಮತ್ತು ಮರ್ಮನಿ ನೃತ್ತ) |

**ನವಸಂಧಿ ಪೂಜೆಗಳು**—ನವಸಂಧಿಗಳ ವಿವಿಧ ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಪೂಜೆಗಳು. ಶ್ಲೋಕಗಳು ಮತ್ತು ಚೂರ್ಣಿಕೆಗಳು, ಜತಿಗಳು, ರಾಗಗಳು ಮತ್ತು ಪಣ್‌ಗಳಗಾನ, ಗೊತ್ತಾದ ತಾಳಗಳಲ್ಲಿ ಹಾಡುವುದು, ಗೊತ್ತಾದ ವಾದ್ಯಗಳನ್ನು ನುಡಿಸುವುದು, ಗೊತ್ತಾದ ನೃತ್ಯಗಳನ್ನಾಡುವುದು ಇವೆಲ್ಲವೂ ನವಸಂಧಿ ಪೂಜೆ ಎನಿಸಿಕೊಂಡಿವೆ. ಇವುಗಳಿಗೆ ಸಂಧಿ ಜತಿಗಳೂ, ಸಂಧಿವಾದ್ಯಗಳು, ಸಂಧಿ ರಾಗಗಳು ಮತ್ತು ಪಣ್‌ಗಳೆಂದು ಹೆಸರು.

**ನವಸೂತಿಕ**—ಈ ರಾಗವು ೭ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ,

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ನವತಾಳಗಳು**—(೧) ಭರತ ಶಾಸ್ತ್ರಂ—ಎಂಬ ತಮಿಳು ಗ್ರಂಥದಲ್ಲಿ ಈ ಒಂಬತ್ತು ತಾಳಗಳನ್ನು ಹೇಳಿದೆ—ಅರಿತಾಳ, ಅರುಮತಾಳ, ಸಮತಾಳ, ಜಯತಾಳ ಚಿತ್ರತಾಳ, ದುರುವತಾಳ, ನಿವಿರ್ತತಾಳ, ಪದಮತಾಳ, ವಿಡತಾಳ.

(೨) ಪಿಂಗಳ ನಿಘಂಟು—ಎಂಬ ಗ್ರಂಥದಲ್ಲಿ ಈ ತಾಳಗಳನ್ನು ಹೇಳಿದೆ—ಸಮತಾಳ, ಅರುಮತಾಳ, ಅಟ್ಟತಾಳ, ಪದಿಮತಾಳ, ಜಯತಾಳ, ಮಟ್ಟಿಯತಾಳ, ವಿಡತಾಳ, ನಿವೃತ್ತತಾಳ, ದುರುವತಾಳ.

**ನವಸಂಧಿ ತಾಳಗಳು**—ಇವು ದೇವಾಲಯಗಳ ನವಸಂಧಿ ಪೂಜಾ ಸಮಯದಲ್ಲಿ ಬಳಸುವ ಒಂಬತ್ತು ಬಗೆಯತಾಳ. ನವಸಂಧಿಗಳು ಯಾವುವೆಂದರೆ—

ಬ್ರಹ್ಮ, ಇಂದ್ರ, ಅಗ್ನಿ, ಯಮ, ನೈಋತಿ, ವರುಣ, ವಾಯು, ಕುಬೇರ ಮತ್ತು ಈಶಾನ. ನವಸಂಧಿ ತಾಳಗಳು ಯಾವುವೆಂದರೆ—

| | | |
|---|---|---|
| ಬ್ರಹ್ಮ — | ಮಧ್ಯ — | ಬ್ರಹ್ಮತಾಳ |
| ಇಂದ್ರ — | ಪೂರ್ವ — | ಇಂದ್ರ (ಸಮ) |
| ಅಗ್ನಿ — | ಆಗ್ನೇಯ — | ಮಟ್ಟಾಪಸನ |
| ಯಮ — | ದಕ್ಷಿಣ — | ಭೃಂಗಿ (ಅಸಮ) |
| ನೈಋತಿ — | ನೈಋತ್ಯ — | ನೈಋತಿ (ಭ್ರಮರ, ಮಲ್ಲ) |
| ವರುಣ — | ಪಶ್ಚಿಮ — | ನವ |
| ವಾಯು — | ವಾಯುವ್ಯ — | ಬಲಿ |
| ಕುಬೇರ — | ಉತ್ತರ — | ಕೊಟ್ಟರಿ |
| ಈಶಾನ — | ಈಶಾನ್ಯ — | ಟಕ್ಕರಿ |

**ನವಾವರಣ ಕೀರ್ತನೆಗಳು**—ಮುತ್ತುಸ್ವಾಮಿ ದೀಕ್ಷಿತರು ತಿರೂವಾರೂರು ದೇವಾಲಯದ ಕಮಲಾಂಬಾ ಅಮ್ಮನವರನ್ನು ಕುರಿತು ರಚಿಸಿರುವ ಒಂಬತ್ತು ಕೀರ್ತನೆಗಳು ದೇವಿಯ ನವಾವರಣ ಪೂಜೆಗೆ ಸಂಬಂಧಿಸಿದ ಸಮುದಾಯ ಕೀರ್ತನೆಗಳು ಇವುಗಳಿಗೆ ವಿಭಕ್ತಿ ಕೀರ್ತನೆಗಳೆಂದು ಹೆಸರು.

**ಆವರಣದ ಸಂಖ್ಯೆ— ಕೀರ್ತನೆ— ರಾಗ— ತಾಳ— ವಿಭಕ್ತಿಯ ಸಂಖ್ಯೆ**

**ಧ್ಯಾನಕೀರ್ತನೆ** — ಕಮಲಾಂಬಿಕೆ — ತೋಡಿ — ರೂಪಕ
ಪ್ರಥಮಾವರಣ–ಕಮಲಾಂಬಾ ಸಂರಕ್ಷತು–ಆನಂದ ಭೈರವಿ–ತ್ರಿಪುಟ–ಪ್ರಥಮಾ ವಿಭಕ್ತಿ
ದ್ವಿತೀಯಾ ,, –ಕಮಲಾಂಬಾಂ ಭಜರೇ –ಕಲ್ಯಾಣಿ –ಆದಿ –ದ್ವಿತೀಯಾ ,,
ತೃತೀಯಾ ,, –ಕಮಲಾಂಬಿಕಾಯಾ –ಶಂಕರಾಭರಣ –ರೂಪಕ–ತೃತೀಯಾ ,,
ಚತುರ್ಥಾ ,, –ಶ್ರೀಕಮಲಾಂಬಿಕಾಯ್ಯೈ –ಕಾಂಭೋಜಿ –ಅಟ –ಚತುರ್ಥೀ ,,
ಪಂಚಮಾ ,, –ಶ್ರೀಕಮಲಾಂಬಾಯಾಃ– ಭೈರವೀ –ಝಂಪ–ಪಂಚಮಿ ,,
ಷಷ್ಟಾ ,, –ಶ್ರೀಕಮಲಾಂಬಿಕಾಯಾಃ–ಪುನ್ನಾಗವರಾಳಿ–ತಿಶ್ರಏಕ–ಷಷ್ಟೀ ,,
ಸಪ್ತಮಾ ,, –ಕಮಲಾಂಬಿಕಾಯಾಂ –ಸಹಾನ –ತ್ರಿಪುಟ –ಸಪ್ತಮಿ ,,
ಅಷ್ಟಮಾ ,, –ಶ್ರೀಕಮಲಾಂಬಿಕೇ –ಘಂಟಾ –ಆದಿ –ಸಂ.ಪ್ರ ,,
ನವಾ ,, –ಶ್ರೀಕಮಲಾಂಬ ಜಯತಿ –ಅಹಿರಿ –ಏಕ –ಸಂ ಪ್ರ ,,
**ಮಂಗಳ ಕೀರ್ತನೆ**—ಶ್ರೀಕಮಲಾಂಬಿಕೆ–ಶ್ರೀ –ಖಂ. ಏಕ–

**ನವಾಭರಣ**—ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.